ಶಂಭೋಃ ಪುಂಭಾವಮುಕ್ತ್ಯೈ ಕಲಿತಕಲಿಮಲಾಸ್ಫಾರಮಾದ್ಯಜ್ಞನೌಘ
ಧ್ವಾಂತಭ್ರಾಂತ್ಯುತ್ಥದಾವಪ್ರಶಮನಶಮನಾಗಾಧದುಃಖಾಪನುತ್ತ್ಯೈ ॥೧೧೮॥

॥ ವಿಷ್ಣುಬ್ರಹ್ಮೇಶ್ವರಾ ಊಚುಃ ॥

ಸೃಷ್ಟಿಸ್ಥಿತ್ಯಂತಕಾರ್ಯೈಸ್ಸತತಪರಿಚಿತಾಪಾರದುಃಖೇಷು ಮಗ್ನಾ ।
ಲಗ್ನಾಃ ಕರ್ಮಜಪಾಪತಾಪಮನಸೋ ಜನ್ಮಾದಿದುಃಖಾಸ್ಪದಾಃ
ಶಾಂತಾಃ ಪ್ರಾಪ್ಯ ಭವತ್ಪದಾಂಬುಜೋತ್ಥಸರಣಿಂ ಮುಕ್ತೇಃ ಕಿಮನ್ಯದ್ಧಿ ನಃ
॥೧೧೯॥

ಸಂತುಷ್ಟುವುಃ ಕುಮಾರಂ ತೇ ಗಣಾಸ್ಸುರಮುನೀಶ್ವರಾಃ ।
ಪ್ರಣಮ್ಯ ಮುದಿತಾಸ್ಸರ್ವೇ ಶೃಣುಧ್ವಂ ತತ್ಸ್ತುತಿಂ ದ್ವಿಜಾಃ ॥೧೨೦॥

---

ಪಡಿಸಿ ಸ್ಥಿರಾನಂದಾತ್ಮಕವಾದ ಮುಕ್ತಿಯನ್ನು ಭಕ್ತರಿಗೆ ಕೊಡುವುದೇ ಈ ಶಿವ ರಹಸ್ಯ. ಗಜಚರ್ಮಾಂಬರಧಾರಿಯೂ, ಕೈಲಾಸವಾಸಿಯೂ, ಮಹಾಮಹಿಮನೂ ಆದ ಮಹೇಶ್ವರನ ಇಂತಹ ದಿವ್ಯ ಕಥಾಮೃತವನ್ನು ನಿನ್ನ ವದನ ಕಮಲದಿಂದ ಹೊಂದಿ, ಅದರಲ್ಲಿ ನಾವು ಮುಳುಗಿ ಪರಿಶುದ್ಧರಾಗಿರುವೆವು. ಮತ್ತು ಪವಿತ್ರರಾಗಿರುವುವು." ॥೧೧೮॥

ಅನಂತರ ಬ್ರಹ್ಮ, ವಿಷ್ಣು, ರುದ್ರರು ಹೀಗೆ ಕುಮಾರಸ್ವಾಮಿಯನ್ನು ಹೊಗಳಿದರು. "ಸ್ಕಂದಸ್ವಾಮಿಯೇ, ನಾವು ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಈ ಕಾರ್ಯಗಳಲ್ಲಿ ತೊಡಗಿ ಸರ್ವದಾ ತತ್ಸಂಬಂಧವಾದ ದುಃಖಪರಂಪರೆಗಳನ್ನು ಹೊತ್ತಿರುವೆವು. ಅಲ್ಲದೆ ಸಾಮಾನ್ಯರಂತೆ ನಾವೂ ಜನನಮರಣಾದಿಗಳಿಗೆ ಸಿಕ್ಕಿ ತೊಳಲುತ್ತಿರುವೆವು. ಈಗ ನಿನ್ನ ವದನದಿಂದ ಬಂದ ಶಂಕರನ ಕಥಾಸರಣಿಯನ್ನು ಕೇಳಿ ಶಾಂತಚಿತ್ತರಾಗಿ ಧನ್ಯರೆನಿಸಿದ್ದೇವೆ. ಸ್ಥಿರವಾದ ಮುಕ್ತಿಗೆ ಈ ಕಥಾಶ್ರವಣಕ್ಕಿಂತ ಮತ್ತಾವ ಸುಲಭ ಮಾರ್ಗವಿರುವುದು?" ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ॥೧೧೯॥

ಹೀಗೆ ಸಕಲರೂ ಕುಮಾರಸ್ವಾಮಿಯನ್ನು ಸ್ತುತಿಸಿದ ಮೇಲೆ ಅಲ್ಲಿ ನೆರೆದಿದ್ದ ಸಕಲ ದೇವತೆಗಳೂ, ಮುನಿಗಳೂ ಒಟ್ಟಾಗಿ ಷಣ್ಮುಖಸ್ವಾಮಿಯನ್ನು ಹೀಗೆ ಸ್ತುತಿಸಲಾರಂಭಿಸಿದರು. ॥೧೨೦॥

॥ ದೇವಾದ್ಯಾ ಊಚುಃ ॥

ಶರಣಾತುಲಮಾತುಲಗಾಧಿಪತೇ
ಕರುಣಾಕರ ಕಾಮದ ಕಾಮಹಂತಃ ।
ಶರಕಾನನಸಂಭವಚಾರುರುಚೇ
ಪರಿಪಾಲಯ ತಾರಕಮಾರಕ ನಃ ॥೧೨೧॥

ಹರಸಾರಸಮುದ್ಭವಹೈಮವತೀಕರ
ಪಲ್ಲವಲಾಲಿತ ಕಮ್ರತನೋ ।
ಪುರವೈರಿಮುಕುಂದಹೃದಂಬುನಿಧೇ
ಪರಿಪಾಲಯ ತಾರಕಮಾರಕ ನಃ ॥೧೨೨॥

ಶರದಿಂದುಸಮಾನಷಡಾನನಾಪಾರ
ಸರಸೀರುಹಲೋಚನಯಾ ವಿಲೋಚನಯಾ ।
ನಿರುಪಾಧಿಕಯಾ ನಿಜಬಾಲತಯಾ
ಪರಿಪಾಲಯ ತಾರಕಮಾರಕ ನಃ ॥೧೨೩॥

---

" ಸ್ಕಂದಸ್ವಾಮಿಯೇ, ನೀನು ಶರಣಾಗತನಾಗಿ ಬಂದ ಸೋದರಮಾವನಾದ ಮೈನಾಕ, ಮಂದರ ಮುಂತಾದ ಪರ್ವತಗಳನ್ನು ರಕ್ಷಿಸಿ ಅವುಗಳಿಗೆ ಅಧಿಪತಿಯಾಗಿ ನಿಂತಿರುವೆ. ಕರುಣಾಸಮುದ್ರನೆನಿಸಿ, 'ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುವಂತಹ ಮಹಾಮಹಿಮನೇ, ಶರವಣದಲ್ಲಿ ಜನಿಸಿ, ದೇಹಕಾಂತಿಯನ್ನು ಅತಿಶಯವಾಗಿ ಪಡೆದಿರುವ ತಾರಕಾರಿಯೇ ! ನಮ್ಮನ್ನು ಕಾಪಾಡು. ॥೧೨೧॥

ಪರಮೇಶ್ವರನ ಪ್ರೀತಿಪುತ್ರನಾಗಿ, ಪಾರ್ವತಿಯ ಕರಪಲ್ಲವದಿಂದ ಪಾಲಿತನಾಗಿ, ಸುಂದರನಾಗಿರುವ ತಾರಕಾರಿಯೇ, ನೀನು ಪರಶಿವನ ಮತ್ತು ಮಹಾವಿಷ್ಣುವಿನ ಹೃದಯವನ್ನು ಸರ್ವದಾ ಆನಂದಗೊಳಿಸುತ್ತಿರುವೆಯಲ್ಲವೆ ? ಇಂತಹ ಮಹಾತ್ಮನಾದ ನೀನು ನಮ್ಮನ್ನು ಕಾಪಾಡು. ॥೧೨೨॥

ಶರತ್ಕಾಲದ ಚಂದ್ರನಂತೆ ಪ್ರಕಾಶಿಸುವ ಆರುಮುಖಗಳಲ್ಲಿಯೂ, ಅತಿ ಸುಂದರವಾಗಿ ಹೊಳೆಯುತ್ತಿರುವ ಕಮಲಲೋಚನಗಳಿಂದ ನೋಡುತ್ತಾ, ಉಪಾಧಿರಹಿತವೂ, ನಿಷ್ಕಲ್ಮಷವೂ ಆದ ದಯಾದೃಷ್ಟಿಯಿಂದ ನಮ್ಮನ್ನು ಉದ್ಧರಿಸು. ॥೧೨೩॥

ಗಿರಿಜಾಸುತ ಸಾಯಕಭಿನ್ನಗಿರೇ
ಸುರಸಿಂಧುತನೂಜ ಸುವರ್ಣರುಚೇ ।
ಶಿಖಿಜಾತ ಶಿಖಾವಲವಾಹಗತೇ
ಪರಿಪಾಲಯ ತಾರಕಮಾರಕ ನಃ ॥೧೨೪॥

ಜಯ ವಿಪ್ರಜನಪ್ರಿಯ ವೀರಮನೋಜಯ
ಭಕ್ತಪರಾಯಣ ಭದ್ರ ನಮೋ ।
ಜಯ ಶಾಖವಿಶಾಖಕುಮಾರ
ನಮೋ ಪರಿಪಾಲಯ ತಾರಕಮಾರಕ ನಃ ॥೧೨೫॥

ಪುರತೋ ಭವ ಮೇ ಪರಿತೋ ಭವ ಮೇ
ಪಥಿ ಮೇ ಭಗವನ್ [1]ಭರ ರಕ್ಷ ನಮಃ ।
ವೀತರಾಗಿಷು ಮೇ ವಿಜಯಿನ್ ಭಗವನ್
ಪರಿಪಾಲಯ ತಾರಕಮಾರಕ ನಃ ॥೧೨೬॥

---

ಪಾರ್ವತೀಪುತ್ರನೂ, ಸುರರಿಗೆ ಸಿಂಧುವಿನಂತಿರುವ ಮಹೇಶ್ವರನ ಪ್ರಿಯ ಪುತ್ರನೂ ಆದ ಸ್ಕಂದಸ್ವಾಮಿಯೇ, ನೀನು ಕ್ರೌಂಚಪರ್ವತವನ್ನು ಬಾಣಗಳಿಂದ ಸಂಪೂರ್ಣವಾಗಿ ಭೇದಿಸಿದವನಲ್ಲವೆ? ಅಗ್ನಿಪುತ್ರನೆನಿಸಿ, ಶಿಖಿವಾಹನನಾಗಿ ಪ್ರಸಿದ್ಧಿ ಗೊಂಡಿರುವ ತಾರಕಾರಾತಿಯೇ, ನಮ್ಮನ್ನು ಪಾಲಿಸು. ॥೧೨೪॥

ವಿಪ್ರರಿಗೆ ಪ್ರಿಯನೆನಿಸಿ, ವೀರರಿಗೆ ಹಿತೈಷಿಯಾಗಿ, ಭಕ್ತರಿಗೆ ವರದನಾಗಿರುವ ಸ್ಕಂದಸ್ವಾಮಿಯೇ ನಿನಗೆ ವಂದನೆ. ಸಕಲ ತೇಜಸ್ಸುಗಳಿಗೂ, ಉಪನಿಷತ್ತುಗಳಿಗೂ ಆಶ್ರಯಭೂತನಾಗಿರುವ ಶಂಕರನ ಸತ್ಪುತ್ರನೆ, ನಿನಗೆ ನಮಸ್ಕಾರ. ನಮ್ಮನ್ನು ಸಲಹು. ॥೧೨೫॥

ಕುಮಾರಸ್ವಾಮಿಯೇ, ನೀನು ನಮ್ಮನ್ನು ಸರ್ವಭಾಗದಲ್ಲಿಯೂ ಕಾಪಾಡುವವನು. ಪುರೋಭಾಗದಲ್ಲಿಯೂ, ನಮ್ಮ ಪಶ್ಚಾದ್ಭಾಗದಲ್ಲಿಯೂ, ಮಾರ್ಗದಲ್ಲಿಯೂ ನಮಗೆ ರಕ್ಷಕನಾಗಿರು. ವೈರಾಗ್ಯದಿಂದಿರುವ ನಮ್ಮಲ್ಲಿ ದಯೆಯನ್ನಿಡು. ನಮ್ಮನ್ನು ಸರ್ವಪ್ರಕಾರದಿಂದಲೂ ಕಾಪಾಡು. ॥೧೨೬॥

---

1 (ಭರಕ್ಷತಾಂತಂ ಪಾ. ರ)

ಇತಿ ಕುಕ್ಕುಟಕೇತುಮನುಸ್ಮರತಾಂ
ಪಠತಾಮಪಿ ಷಣ್ಮುಖಷಟ್ಕಮಿದಂ ।
ನಮತಾಮಭಿನಂದನಮಿಂದುಭೃತೋ
ನ ಕ್ಷಯಂ ಕ್ವಚಿದಸ್ತಿ ಶರೀರಿಣಾಂ ॥೧೨೭॥

ಅಣುಸ್ಸ್ಥಾಣುರ್ವೇಣುಪ್ರತಿನಿಭಸುಮೋಪ್ಯಜ್ಞಗದಿದಂ
ಮಹಾಭಾಸುಶ್ಛಾಯಂ ತುಹಿನಗಿರಿರಾಸ್ತೇ ಹಿ ಹಿತಕೃತ್ ।
ಹಿಮಾಂಶುಂ ಸ್ವರ್ಭಾನುರ್ಭವಗತಜನಾನಾಂ ಚ ಹಿ ಮುದೇ
ಸಮೀಚೀನೇನೇದಂ ದಿವಿ ವಿತತಚಿತ್ರೈಕವಸತಿ ॥೧೨೮॥

ಜಾತೇ ಪಾದಾಭಿಘಾತೇ ಚಲತಿ ಮಹಿತಲೇ ಸವ್ಯಥೇ ಭೋಗಿನಾಥೇ
ಸಾಕ್ರಂದೇ ದಂತಿಬೃಂದೇ ವಿಲುಠತಿ ಕಮಠೇ ಚಂಚಲೇ ಶೈಲಜಾಲೇ ।
ನಾದೋನ್ನಿದ್ರೇ ಸಮುದ್ರೇ ನದರಮಣಸುತಾನಾಯಕೇ ಜಾಗರೂಕೇ
ಸಾಶ್ಚರ್ಯತ್ರಾಸಧುರ್ಯೇ ತ್ರಿಭುವನಮಧುನಾ ಪಶ್ಯ ನೋ ತಾಂಡವಂ ತ್ವಂ॥೧೨೯॥

---

ಹೀಗೆ ಕುಕ್ಕುಟದ ಆಕಾರವೇ ಧ್ವಜವಾಗಿ ಉಳ್ಳ ಷಣ್ಮುಖಸ್ವಾಮಿಯ ಪ್ರಾರ್ಥನಾಷಟ್ಕವನ್ನು ಯಾರು ಭಕ್ತಿಯಿಂದ ಪಠಿಸುವರೋ, ಅವರು ಪರಶಿವನ ಕೃಪಾಪಾತ್ರರಾಗಿ, ನಾಶರಹಿತರಾಗಿ, ಮುಕ್ತಿಪ್ರಾಪ್ತಿಗೆ ಅರ್ಹತೆಯನ್ನು ಪಡೆಯುವರು. ಇದರಿಂದ ಭಕ್ತರು ಸ್ಥಿರವಾದ ಸುಖಾನುಭವಿಗಳಾಗುವರು. ॥೧೨೭॥

ಸಮೀಚೀನ ಪುರುಷನಾದ ಈ ಮಹೇಶ್ವರನು, ಅಣುರೂಪಿಯಾಗಿಯೂ, ಸ್ಥಾಣುರೂಪಿಯಾಗಿ ಕಾಣುವನು. ಬಿದಿರಿನ ಪುಷ್ಪದಂತೆ ಆಭಾಸವಾಗಿ ಕಾಣುವ ಜಗತ್ತೇ ಇವನು. ಅತಿಯಾದ ತೇಜಸ್ಸುಳ್ಳವನಾದರೂ, ಹಿಮಾಲಯಂತೆ ಶೀತಲವಾಗಿ ಜನರ ಹಿತಕ್ಕಾಗಿ ನೆಲಸಿರುವವನೂ ಈತನೇ, ಸೂರ್ಯ, ಚಂದ್ರ, ಮುಂತಾದ ತೇಜೋ ವಸ್ತುಗಳೆನಿಸಿ ಭಕ್ತರಿಗೆ ಹಿತವನ್ನುಂಟುಮಾಡಲು ಸ್ವರ್ಗಲೋಕದಲ್ಲಿ ನಾನಾ ರೂಪ ದಲ್ಲಿ ವಿಹರಿಸುವ ಪರಮಪುರುಷನೇ ಈತನು. ॥೧೨೮॥

ಪಾರ್ವತೀಪತಿಯೂ ಪರಬ್ರಹ್ಮಸ್ವರೂಪನೂ ಆದ ಶಂಕರನ ಪಾದಾಘಾತಕ್ಕೆ, ಸಕಲ ಭೂಮಿಯೂ ನಡುಗಿ ಹೋಗುವುದು. ಆದಿಶೇಷನು ಭೂಮಿಯನ್ನು ಹೊರ ಲಾರದೆ ವ್ಯಥೆಪಡುವನು. ಅಷ್ಟದಿಗ್ಗಜಗಳು ಭಾರವನ್ನು ಸಹಿಸಲಾರದೆ ಕೂಗಿಕೊಳ್ಳು ವುವು. ಆದಿಕೂರ್ಮನು ಉರುಳುವನು. ಪರ್ವತಪಂಕ್ತಿಗಳು ಹಾರುವುವು. ಸಮುದ್ರವು ಮೇರೆದಪ್ಪುವುದು. ಕ್ಷೀರಸಾಗರಶಾಯಿಯಾದ ಲಕ್ಷ್ಮೀಪತಿಯು

ಪಾಯಾದಾಯಾಸಖೇದಕ್ಷುಭಿತಫಣಿಫಣಾರತ್ನನಿರ್ಯತ್ನನಿರ್ಯ
ಚ್ಛಾಯಾಮಾಯಾಪತಂಗದ್ಯುತಿಮುದಿತವಿಯದ್ವಾಹಿನೀಚಕ್ರವಾಕಂ ।
ಅಶ್ರಾಂತಶ್ರಾಂತಚೂಡಾ ತುಹಿನಕರಕರಾಲೀಕನಾಲೀಕನಾಲ
ಚ್ಛೇದಾಮೋದಾನುಧಾವದ್ದ್ರುಹಿಣರಥಖಗಂ ಧೂರ್ಜಟೇಸ್ತಾಂಡವಂ
ನೋ ॥೧೩೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಸ್ಕಂದಸ್ತುತಿರ್ನಾಮ
ಷಷ್ಟಿತಮೋಽಧ್ಯಾಯಃ

ಇತಿ ಶ್ರೀಶಿವರಹಸ್ಯೇ ಮಾಹೇಶಾಖ್ಯೇ ಪ್ರಥಮಾಂಶಸ್ಸಮಾಪ್ತಃ.

---

ಯೋಗನಿದ್ರೆಯಿಂದ ಎಚ್ಚರಗೊಳ್ಳುವನು. ತ್ರಿಲೋಕವು ಆಶ್ಚರ್ಯದಿಂದ ಭಯಗೊಳ್ಳುವುದು. ಇಂತಹ ಪಾದಾಘಾತದಿಂದ ಕೂಡಿದ ಶಂಕರನ ನಾಟ್ಯವನ್ನು ನೋಡಿ ಎಲ್ಲರೂ ಶಂಕರನ ಮಹಿಮೆಯನ್ನು ಅರಿಯಲಿ. ॥೧೨೯॥

ಪರಮೇಶ್ವರನ ತಾಂಡವ ಕಾಲದ ಆರ್ಭಟಕ್ಕೆ ಆದಿಶೇಷನ ಶಿರೋಭಾಗದಲ್ಲಿರುವ ಶಿರೋರತ್ನಗಳು ಅಲ್ಲಲ್ಲಿ [illegible] ಹೊಳೆಯುವುವು. ಇದನ್ನು ನೋಡಿ, ಗಂಗಾನದಿಯ ದಡದಲ್ಲಿ ಹಾರಾಡುವ ಚಕ್ರವಾಕಪಕ್ಷಿಗಳು ಸೂರ್ಯಭ್ರಾಂತಿಯನ್ನು ಪಡೆಯುತ್ತಿರುವುವು. ಹಾಗೆಯೇ ಶಿರೋಭಾಗದಲ್ಲಿರುವ ಚಂದ್ರನು ಬಳಲಿ ಅಲ್ಲಾಡುತ್ತಿರುವಾಗ, ಬ್ರಹ್ಮನ ವಾಹನವಾದ ಹಂಸಪಕ್ಷಿಯು ಆ ಚಂದ್ರನನ್ನು ಕಮಲನಾಳಗಳ ಚೂರೆಂಬುದಾಗಿ ತಿಳಿದು, ಅದನ್ನು ತಿನ್ನಲು ಓಡಿಹೋಗುತ್ತಿರುವುದು. ಹೀಗೆ ಆದಿಶೇಷ, ಚಂದ್ರ ಮುಂತಾದ ಮಹಾಮಹಿಮವಸ್ತುಗಳಿಗೂ ಆಯಾಸವನ್ನುಂಟುಮಾಡುವಂತಹ ಪರಶಿವನ ನಾಟ್ಯವು ಸರ್ವದಾ ಭಕ್ತರನ್ನು ಕಾಪಾಡಲಿ" ಎಂದು ಸೂತಮಹಾಮುನಿಗಳು ಈಶ್ವರನಮಸ್ಕಾರಪೂರ್ವಕವಾದ ಮಂಗಳವನ್ನು ವಾಜಶ್ರವಸಾದಿಗಳಿಗೆ ಅರುಹಿದರು. ॥೧೩೦॥

ಹೀಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಸ್ಕಂದಸ್ತುತಿ ಎಂಬ
ಅರುವತ್ತನೆಯ ಅಧ್ಯಾಯವು ಮುಗಿದುದು.

ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಮಾಹೇಶವೆಂಬ
ಅಂಶವು ಸಮಾಪ್ತಿಗೊಂಡಿತು.

॥ ಓಂ ತತ್ಸತ್ ॥